# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 265 (34)

ಸದಸ್ಯರ ಹೆಸರು : ಶ್ರೀ ಹೆಚ್.ಎಂ. ರಮೇಶ ಗೌಡ
(ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸುವ ದಿನಾಂಕ : 02.02.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಪ್ರಸ್ತುತ ವರ್ಷದಲ್ಲಿ ರಾಜ್ಯದ ಬೃಹತ್ ಕೈಗಾರಿಕಾ ಬಂಡವಾಳ ಹೂಡಿಕೆ ಆಕರ್ಷಣೆ ತೀವ್ರ ಕುಸಿತ ಕಂಡಿರುವ ಹಿನ್ನಲೆಗೆ ಸೂಕ್ತ ಕಾರಣಗಳಾವುವು; | ಪ್ರಸ್ತುತ ವರ್ಷದಲ್ಲಿ ಕೋವಿಡ್-19 ರ ನಡುವೆಯೂ ಕೇಂದ್ರ ಸರ್ಕಾರದ ಡಿ.ಪಿ.ಐ.ಐ.ಟಿ ಇಲಾಖೆಯು ಹೊರಡಿಸಿರುವ ಅಧಿಕೃತ ಮಾಹಿತಿ ಪ್ರಕಾರ, 2020ರ ಜನವರಿಯಿಂದ ನವೆಂಬರ್‌ವರೆಗೆ ದೇಶದಲ್ಲಿ ವಿವಿಧ ಕೈಗಾರಿಕೆಗಳನ್ನು ಸ್ಥಾಪಿಸಲು ಒಟ್ಟು 1308 ಬಂಡವಾಳ ಹೂಡಿಕೆ ಪ್ರಸ್ತಾವನೆಗಳು (Industrial Investment Intentions) ರೂ.3,95,092 ಕೋಟಿ ಬಂಡವಾಳದೊಂದಿಗೆ ನೋಂದಾಯಿತವಾಗಿವೆ.<br><br>ಈ ಪೈಕಿ ರಾಜ್ಯದ ಪಾಲು 103 ಹೂಡಿಕೆ ಪ್ರಸ್ತಾವನೆಗಳು ಹಾಗೂ ರೂ.1,59,255 ಕೋಟಿ ಬಂಡವಾಳ ಹೂಡಿಕೆಯಾಗಲಿದೆ. ಅಂದರೆ, ದೇಶದ ಒಟ್ಟು ಹೂಡಿಕೆ ಪ್ರಸ್ತಾವನೆಗಳಲ್ಲಿ ರಾಜ್ಯದ ಪಾಲು ಶೇ.41 ಆಗಿದೆ.<br><br>ಏಪ್ರಿಲ್-2020 ರಿಂದ ಸೆಪ್ಟಂಬರ್-2020 ರವರೆಗೆ ರೂ. 27,458 ಕೋಟಿ ವಿದೇಶಿ ನೇರ ಬಂಡವಾಳ ಹೂಡಿಕೆಗೆ ಭಾರತ ಸರ್ಕಾರವು ಅನುಮೋದನೆ ನೀಡಿದ್ದು, ರಾಜ್ಯವು ದೇಶದ 2ನೇ ಸ್ಥಾನದಲ್ಲಿದೆ.<br><br>ಅಲ್ಲದೇ, ಮಾರ್ಚ್ 2020 ರಿಂದ ಡಿಸೆಂಬರ್ 2020 ರವರೆಗೆ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡುವ ಸಮಿತಿ ಹಾಗೂ ರಾಜ್ಯ ಮಟ್ಟದ ಏಕಗವಾಕ್ಷಿ ಅನುಮೋದನೆ ಸಮಿತಿಗಳಿಂದ ಒಟ್ಟು 326 ಯೋಜನೆಗಳು ಅನುಮೋದನೆಗೊಂಡಿದ್ದು, ರೂ.76,480 ಕೋಟಿ ಬಂಡವಾಳ ಹೂಡಿಕೆಯಾಗಲಿದ್ದು 1,42,070 ಜನರಿಗೆ ಉದ್ಯೋಗ ಒದಗಲಿದೆ. |
| ಆ | ಕೋವಿಡ್ ಹೊರತುಪಡಿಸಿ ಬಂಡವಾಳ ಹೂಡಿಕೆ ಆಕರ್ಷಣೆ ಕುಸಿತ ಕಾಣಲು ಬೇರೆ ಕಾರಣಗಳೇನು; | ಕೇಂದ್ರ ಸರ್ಕಾರದ ಡಿ.ಪಿ.ಐ.ಐ.ಟಿ ಇಲಾಖೆಯು ಹೊರಡಿಸಿರುವ ಅಧಿಕೃತ ಮಾಹಿತಿ ಪ್ರಕಾರ ರಾಜ್ಯದಲ್ಲಿ ಬಂಡವಾಳ ಹೂಡಿಕೆ ಆಕರ್ಷಣೆಗೆ ಸಂಬಂಧಿಸಿದಂತೆ ಕುಸಿತವಾಗಿರುವುದಿಲ್ಲ. |

| | | |
|---|---|---|
| ಇ | ಕಳೆದ ಬಂಡವಾಳ ಹೂಡಿಕೆ ಸಮ್ಮೇಳನದ ಫಲಿತಾಂಶವನ್ನು ಈ ಸರ್ಕಾರ ಸದುಪಯೋಗಪಡಿಸಿಕೊಳ್ಳದೇ ಇರಲು ಕಾರಣಗಳೇನು; | ಹಿಂದಿನ ಬಂಡವಾಳ ಹೂಡಿಕೆ ಸಮ್ಮೇಳನಗಳ ಸಮಯದಲ್ಲಿ ಅನುಮೋದನೆಗೊಂಡ ಯೋಜನೆಗಳ ಅನುಷ್ಠಾನಕ್ಕೆ ಬೇಕಾಗಿರುವ ಅವಶ್ಯಕ ಬೆಂಬಲ ಸೇವೆಗಳನ್ನು ಒದಗಿಸಲಾಗುತ್ತಿದೆ. |
| ಈ | ರಾಜ್ಯದ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ತೀವ್ರ ಹಿನ್ನಡೆ ಕಾಣುತ್ತಿರುವ ಹಿನ್ನಲೆಯಲ್ಲಿ ಇದರ ಉತ್ತೇಜನಕ್ಕೆ ಸರ್ಕಾರದ ಕಾರ್ಯಕ್ರಮಗಳೇನು? (ಮಾಹಿತಿ ನೀಡುವುದು) | ಮೇಲೆ ವಿವರಿಸಿದಂತೆ ರಾಜ್ಯದಲ್ಲಿ ಕೈಗಾರಿಕಾಭಿವೃದ್ಧಿಯಲ್ಲಿ ಹಿನ್ನಡೆ ಇಲ್ಲದಿದ್ದರೂ ಸಹ, ಕೋವಿಡ್-19ರ ನಂತರ ಹೊಸ ಅವಕಾಶಗಳನ್ನು ಗಮನದಲ್ಲಿಟ್ಟುಕೊಂಡು ಹಾಗೂ ಬೃಹತ್ ಬಂಡವಾಳವನ್ನು ಎಲ್ಲಾ ಕ್ಷೇತ್ರಗಳಲ್ಲಿ ರಾಜ್ಯಕ್ಕೆ ಆಕರ್ಷಿಸುವ ನಿಟ್ಟಿನಲ್ಲಿ, ರಾಜ್ಯದ ಸಮಗ್ರ ಅಭಿವೃದ್ಧಿ ಹಾಗೂ ಬೆಂಗಳೂರಿನಿಂದ ಹೊರಗಡೆ ಕೈಗಾರಿಕೆಗಳನ್ನು ಕರ್ನಾಟಕದಾದ್ಯಂತ ಟಯರ್-2 ಹಾಗೂ ಟಯರ್-3 ನಗರಗಳಲ್ಲಿ ವಿಸ್ತರಿಸುವ ಧ್ಯೇಯವನ್ನು ಹೊಂದಿರುವ ನೂತನ ಕೈಗಾರಿಕಾ ನೀತಿ 2020-25 ನ್ನು ದಿನಾಂಕ: 13.08.2020 ರಂದು ಜಾರಿಗೆ ತರಲಾಗಿದೆ.<br><br>ಈ ನೀತಿಯಲ್ಲಿ ಹಲವಾರು ಸುಧಾರಣೆಗಳನ್ನು ತಂದಿದ್ದು, ಮುಖ್ಯವಾಗಿ ಭೂಮಿ ಸಂಗ್ರಹಣೆ, ಕಾರ್ಮಿಕ ಕಾನೂನುಗಳ ಸುಧಾರಣೆ ಹಾಗೂ ಆಕರ್ಷಕ ರಿಯಾಯಿತಿ ಹಾಗೂ ಉತ್ತೇಜನಗಳನ್ನು ನೀಡಲಾಗಿದ್ದು, ಇದರಿಂದ ರಾಜ್ಯದಲ್ಲಿ ಬಂಡವಾಳ ಹೂಡಿಕೆ ಆಕರ್ಷಣೆ ವೃದ್ಧಿಸಿದೆ.<br><br>ಭಾರತದ ಹಾಗೂ ವಿಶ್ವದ ಹಲವಾರು ಉದ್ಯಮಿಗಳೊಂದಿಗೆ ವಿಡಿಯೋ ಕಾನ್ಫರೆನ್ಸ್ ಸಭೆಗಳನ್ನು ಸನ್ಮಾನ್ಯ ಮುಖ್ಯಮಂತ್ರಿಗಳು / ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರು / ಅಪರ ಮುಖ್ಯ ಕಾರ್ಯದರ್ಶಿಗಳು / ಕೈಗಾರಿಕಾಭಿವೃದ್ಧಿ ಆಯುಕ್ತರು ಇವರುಗಳ ನೇತೃತ್ವದಲ್ಲಿ ಆಯೋಜಿಸಲಾಗಿದ್ದು, ಬಂಡವಾಳ ಹೂಡಲು ಪ್ರೇರೇಪಿಸಲಾಗಿರುತ್ತದೆ.<br><br>ಜರ್ಮನಿ, ಜಪಾನ್, ಜೆಕ್ ರಿಪಬ್ಲಿಕ್, ನ್ಯೂಯಾರ್ಕ್, ಫ್ರಾನ್ಸ್ ಹಾಗೂ ಇತರೆ ರಾಯಭಾರಿಗಳೊಂದಿಗೆ ಸಭೆಗಳನ್ನು ಏರ್ಪಡಿಸಿ ರಾಜ್ಯಕ್ಕೆ ಬಂಡವಾಳ ಆಕರ್ಷಿಸಲು ಪ್ರೋತ್ಸಾಹಿಸಲಾಗಿದೆ. |

ಸಿಐ 37 ಎಸ್‌ಪಿಐ 2021

**(ಜಗದೀಶ್ ಶೆಟ್ಟರ)**
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು